## ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ **167**

ಸದಸ್ಯರ ಹೆಸರು ಶ್ರೀ. ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ದಿನಾಂಕ **22.09.2020**

ಉತ್ತರಿಸುವವರು ಮಾನ್ಯ ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯ ಹಳಿಯಾಳ/ಜೋಯಿಡಾ ತಾಲ್ಲೂಕಿನಲ್ಲಿ ಕಳೆದ 3 ವರ್ಷಗಳಿಂದ ನಿರ್ಮಿಸಲಾಗಿರುವ ಲೇಔಟ್‌ಗಳಾವುವು (ಸ್ಥಳ ಪ್ಲಾಟ್‌ಗಳ ವಿವರ, ಅದಕ್ಕೆ ಸಂಬಂಧಿಸಿದ ಹಕ್ಕುದಾರರು ಈ ಸ್ವತ್ತು ಮಾಡಿದ ಲೇಔಟ್‌ಗಳ ವಿವರಗಳನ್ನು ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಪುರಸಭೆ ಹಳಿಯಾಳದಲ್ಲಿ ನಿರ್ಮಿಸಲಾಗಿರುವ ಬಡಾವಣೆಗಳ ಮಾಹಿತಿಯನ್ನು ನಮೂನೆ -1 ರಲ್ಲಿ ಸಲ್ಲಿಸಿದೆ.<br><br>ದಾಂಡೇಲಿ ನಗರಸಭೆಯ ವ್ಯಾಪ್ತಿಯಲ್ಲಿ ಕಳೆದ 03 ವರ್ಷಗಳಿಂದ ಯಾವುದೇ ಲೇಔಟ್‌ಗಳು ನಿರ್ಮಾಣವಾಗಿರುವುದಿಲ್ಲ. |
| ಆ) | ಲೇಔಟ್ ಮಾಡಲು ಇರುವ ಮಾನದಂಡಗಳೇನು; ಎಷ್ಟು ಲೇಔಟ್‌ಗಳು ಅಧಿಕೃತವಾಗಿ ನೋಂದಾವಣೆಗೆ ಸಿದ್ಧವಾಗಿರುತ್ತದೆ; (ಸವಿಸ್ತಾರ ವರದಿ ನೀಡುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 08 ಟಿಟಿಪಿ 2013 ಬೆಂಗಳೂರು ದಿನಾಂಕ:24-05-2014 ರಲ್ಲಿ ವಿವರಿಸಿದಂತೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ:ನಅಇ 09 ಟಿಟಿಪಿ 2014 ಬೆಂಗಳೂರು ದಿನಾಂಕ:05-09-2017 ರಲ್ಲಿ ಸೂಚಿಸಿದಂತೆ ನಗರ ಸ್ಥಳೀಯ ಸಂಸ್ಥೆಯಿಂದ ಭೂ ಪರಿವರ್ತನೆಗೆ ನಿರಾಕ್ಷೇಪಣಾ ಪತ್ರ ಪಡೆದು ಭೂಪರಿವರ್ತನೆ ನಂತರ ನಗರ ಮತ್ತು ಗ್ರಾಮಾಂತರ ಯೋಜನಾ ಪ್ರಾಧಿಕಾರ ರವರಿಂದ ಕರಡು ವಿನ್ಯಾಸ ನಕ್ಷೆ ತಯಾರಿಸಲಾಗುವುದು. |

| | | |
|---|---|---|
| | | ಬಡಾವಣೆ ಮಾಲಿಕರು ಬಡಾವಣೆ ಅಭಿವೃದ್ಧಿ ಕಾಮಗಾರಿಗಳಾದ ರಸ್ತೆ, ವಿದ್ಯುತ್ ಬೀದಿ ದೀಪ, ಚರಂಡಿ, ಉದ್ಯಾನವನ, ಕುಡಿಯುವ ನೀರಿನ ಸೌಲಭ್ಯಗಳ ಕಾಮಗಾರಿಗಳ ಅಂದಾಜು ಪಟ್ಟಿ ಸಿದ್ಧಪಡಿಸಲಾಗುವುದು. ಅಂದಾಜು ಪಟ್ಟಿಯಲ್ಲಿನ ಮೊತ್ತಕ್ಕೆ ಶೇ9% ರಷ್ಟು ಮೇಲ್ವಿಚಾರಣಾ ಶುಲ್ಕವನ್ನು ನಗರ ಸ್ಥಳೀಯ ಸಂಸ್ಥೆಗೆ ಬಡಾವಣೆಯ ಮಾಲಿಕರು ಭರಣಾ ಮಾಡಿದ ನಂತರ ಬಡಾವಣೆ ಅಭಿವೃದ್ಧಿ ಕಾಮಗಾರಿ ನಿರ್ವಹಿಸಲು ಆದೇಶವನ್ನು ನೀಡಲಾಗುತ್ತಿದೆ.<br>ಅಂತಿಮವಾಗಿ ಬಡಾವಣೆ ಕಾಮಗಾರಿ ಪೂರ್ಣಗೊಂಡ ನಂತರ ನಗರ ಮತ್ತು ಗ್ರಾಮಾಂತರ ಯೋಜನಾ ಪ್ರಾಧಿಕಾರ ರವರಿಂದ ಕಾಮಗಾರಿ ಪೂರ್ಣಗೊಂಡ ಬಗ್ಗೆ ಬಡಾವಣೆಯ ಅಂತಿಮ ವಿನ್ಯಾಸ ನಕ್ಷೆ ಅನುಮೋದನೆ ನೀಡಿ ಭೂ ದಾಖಲೆಯ ಸಹಾಯಕ ನಿರ್ದೇಶಕರು ಭೂ ಮಾಪನಾಧಿಕಾರಿಗಳಿಂದ ಕೆ.ಜಿ.ಪಿ ಅಂತಿಮಗೊಳಿಸಿ, ಉಪನೊಂದಣಾಧಿಕಾರಿಗಳಿಂದ ರೇರಾದಲ್ಲಿ ನೋಂದಾಯಿಸಿ ಬಳಿಕ ನಗರ ಸ್ಥಳೀಯ ಸಂಸ್ಥೆಯಲ್ಲಿ ಇ-ಸ್ವತ್ತು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br>ನೋಂದಣಿಗೆ ಸಿದ್ಧವಾಗಿರುವ ಬಡಾವಣೆಗಳ ವಿವರವನ್ನು ನಮೂನೆ-2 ರಲ್ಲಿ ಸಲ್ಲಿಸಿದೆ. |
| ಇ) | ಅಭಿವೃದ್ಧಿ ಶುಲ್ಕ ತುಂಬದೇ ಇದ್ದಲ್ಲಿ ಸೈಟ್ ಮಾರಲು ನಗರಸಭೆ/ಪುರಸಭೆ ಅಧಿಕಾರಿಯವರು ಅನುಮತಿ ನೀಡಬಹುದೇ: | ಭೂ ಮಾಲಿಕರಿಂದ ಅಭಿವೃದ್ಧಿ ಮೇಲ್ವಿಚಾರಣಾ ಶುಲ್ಕ ಭರಣಾ ಮಾಡಿಸಿಕೊಂಡು ಅಭಿವೃದ್ಧಿ ಕಾಮಗಾರಿ ಪ್ರಾರಂಭಿಸಿದ ನಂತರ ಸುತ್ತೋಲೆಯಂತೆ ನಿವೇಶನ ಮಾರಾಟ |

| | | |
|---|---|---|
| | ದಾಂಡೇಲಿ/ ಹಳಿಯಾಳ ತಾಲ್ಲೂಕಿನ ಎಷ್ಟು ಲೇಔಟ್ ಮಾಲೀಕರು ಇಲ್ಲಿಯವರೆಗೆ ಅಭಿವೃದ್ಧಿ ಶುಲ್ಕ ತುಂಬಿರುತ್ತಾರೆ: ಎಷ್ಟು ಮಂದಿ ಲೇಔಟ್ ಮಾಲೀಕರು ಅಭಿವೃದ್ಧಿ ಶುಲ್ಕ ತುಂಬಬೇಕಾಗಿರುತ್ತದೆ: ಅಭಿವೃದ್ಧಿ ಶುಲ್ಕ ತುಂಬದೇ ಇರುವ ಸೈಟ್ ಮಾಲೀಕರಿಗೆ ಸೈಟ್ ಮಾರಲು ಅನುಮತಿ ನೀಡಲಾಗುವುದೆ: (ವಿವರ ನೀಡುವುದು) | ಮಾಡಲು ಅನುಮತಿ ನೀಡಲಾಗುತ್ತಿದೆ. ಅಭಿವೃದ್ಧಿ ಶುಲ್ಕ ತುಂಬದೇ ಇದ್ದಲ್ಲಿ ಅನುಮತಿ ನೀಡಲು ಅವಕಾಶವಿರುವುದಿಲ್ಲ.<br><br>ವಿವರವಾದ ಮಾಹಿತಿಯನ್ನು ನಮೂನೆ-3 ರಲ್ಲಿ ಸಲ್ಲಿಸಿದೆ. (ಪ್ರತಿ ಲಗತ್ತಿಸಿದೆ). |
| ಈ) | ಈಗಾಗಲೇ ಸಾರ್ವಜನಿಕರ ದೂರಿನ ಪ್ರಕಾರ ಕೆಲವೊಂದು ಸೈಟ್ ಮಾಲೀಕರಿಗೆ ಅಭಿವೃದ್ಧಿ ಶುಲ್ಕ ತುಂಬಿಸಿಕೊಳ್ಳದೇ ಅನಧಿಕೃತವಾಗಿ ನೋಂದಣಿಗೆ ನಗರಸಭೆ/ ಪುರಸಭೆ ಅಧಿಕಾರಿಗಳು ಅವಕಾಶ ಕಲ್ಪಸಿರುತ್ತಾರೆಂದು ತಿಳಿದು ಬಂದಿದ್ದು, ಈ ವಿಷಯದಲ್ಲಿ ಸರ್ಕಾರ ತನಿಖೆ ಮಾಡಿ ಈ ರೀತಿ ಅವ್ಯವಹಾರ ಮಾಡಿರುವ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳುವುದೇ: ಇಲ್ಲವೇ ಸದರಿ ವಿಷಯದಲ್ಲಿ ಖಾತರಿ ಪಡಿಸಿಕೊಳ್ಳಲು ಸಂಬಂಧಿಸಿದ ಜಿಲ್ಲಾಧಿಕಾರಿಯಿಂದ ತನಿಖೆ ಮಾಡಿಸಲಾಗುವುದೇ? (ವಿವರ ನೀಡುವುದು) | ಹಳಿಯಾಳ ಪುರಸಭೆಯಿಂದ ಅಭಿವೃದ್ಧಿ ಶುಲ್ಕ ತುಂಬಿಸಿಕೊಳ್ಳದೆ ಅನಧಿಕೃತವಾಗಿ ನೋಂದಣಿ ಅವಕಾಶ ಕಲ್ಪಿಸಿರುವುದಿಲ್ಲ.<br><br>ಈ ರೀತಿ ನಿರ್ದಿಷ್ಟವಾದ ದೂರೇನಾದರೂ ಬಂದಲ್ಲಿ ತನಿಖೆ ಕೈಗೊಳ್ಳಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗುವುದು. |

ಕಡತ ಸಂಖ್ಯೆ: ನಅಇ **97** ಜಿಇಎಲ್ **2020**

(ಡಾ|| ನಾರಾಯಣಗೌಡ)
ಡಾ. ನಾರಾಯಣ ಗೌಡ
ಪೌರಾಡಳಿತ, ತೋಟಗಾರಿಕೆ ಮತ್ತು ರೇಷ್ಮೆ ಸಚಿವರು